# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಡಾ : ತೇಜಸ್ವಿನಿಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **670** |
| ಉತ್ತರಿಸಬೇಕಾದ ದಿನಾಂಕ | : | 15.02.2019 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr>
<td>ಅ)</td>
<td>ಕರ್ನಾಟಕ ರಾಜ್ಯದಲ್ಲಿನ ಜನ ಸಂಖ್ಯೆ (ಕುಟುಂಬ) ಎಷ್ಟು; ಸ್ವಂತ ಮನೆ ಹೊಂದಿರುವವರ ಸಂಖ್ಯೆ ಎಷ್ಟು; ಸರ್ಕಾರ ಸರ್ವರಿಗೂ ಸ್ವಂತ ಮನೆ ಒದಗಿಸಲು ಯಾವ ಯಾವ ಯೋಜನೆಯಡಿ ಪ್ರಯತ್ನಿಸುತ್ತಿದೆ; ಕೇಂದ್ರ ರಾಜ್ಯಗಳ ಅನುದಾನವೆಷ್ಟು; (ವಿವರ ನೀಡುವುದು)</td>
<td>
2011 ರ ರಾಷ್ಟ್ರೀಯ ಜನಗಣತಿ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಒಟ್ಟು 6.11 ಕೋಟಿ ಜನ ಸಂಖ್ಯೆ (ಒಟ್ಟು 1.32 ಕೋಟಿ ಕುಟುಂಬಗಳು) ಇರುತ್ತದೆ. ಸ್ವಂತ ಮನೆ ಹೊಂದಿರುವವರ ಮಾಹಿತಿಯು ಲಭ್ಯವಿರುವುದಿಲ್ಲ.<br><br>
2011 ರ ರಾಷ್ಟ್ರೀಯ ಜನಗಣತಿ ಸಮೀಕ್ಷೆಯ ಪ್ರಕಾರ ಎಪಿಎಲ್/ಬಿಪಿಎಲ್ ಕುಟುಂಬಗಳನ್ನು ಒಳಗೊಂಡಂತೆ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ಒಟ್ಟಾರೆ 64.07 ಲಕ್ಷ ಕುಟುಂಬಗಳು ವಸತಿ ರಹಿತರಿರುವುದು ಕಂಡು ಬಂದಿರುತ್ತದೆ.<br><br>
ಸರ್ಕಾರವು ಬಡತನ ರೇಖೆಗಿಂತ ಕೆಳಗಿರುವ ವಸತಿ ರಹಿತರಿಗೆ ಕೆಳಕಂಡ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದ್ದು, ಸದರಿ ಯೋಜನೆಯಡಿ ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಒದಗಿಸಲಾದ ಅನುದಾನದ ವಿವರವನ್ನು ಕೆಳಕಂಡಂತೆ ವಿವರಿಸಲಾಗಿದೆ.<br><br>
(ರೂ.ಲಕ್ಷಗಳಲ್ಲಿ)
<table>
<tr><th rowspan="2">ಕ್ರ.ಸಂ</th><th rowspan="2">ಯೋಜನೆ</th><th colspan="2">ನೀಡಲಾಗುವ ಸಹಾಯಧನ</th></tr>
<tr><th>ಪ.ಜಾತಿ/ಪ.ಪಂಗಡ</th><th>ಸಾಮಾನ್ಯ</th></tr>
<tr><td>1.</td><td>ಬಸವ ವಸತಿ ಯೋಜನೆ</td><td>-</td><td>1.20</td></tr>
<tr><td>2.</td><td>ಡಾ : ಬಿ.ಆರ್. ಅಂಬೇಡ್ಕರ್ ನಿವಾಸ ಯೋಜನೆ</td><td>ಗ್ರಾಮೀಣ ಪ್ರದೇಶದಲ್ಲಿ ರೂ.1.75 ಲಕ್ಷ ಮತ್ತು ನಗರ ಪ್ರದೇಶದಲ್ಲಿ ರೂ.2.00 ಲಕ್ಷ</td><td>-</td></tr>
<tr><td>3.</td><td>ದೇವರಾಜು ಅರಸು ವಿಶೇಷ ವಸತಿ ಯೋಜನೆ (ನಗರ ಮತ್ತು ಗ್ರಾಮೀಣ)</td><td>1.50</td><td>1.20</td></tr>
<tr><td>4.</td><td>ವಾಜಪೇಯಿ ವಸತಿ ಯೋಜನೆ</td><td>-</td><td>1.50</td></tr>
</table>
<br>
ಕೇಂದ್ರ ಸರ್ಕಾರದಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳು :<br><br>
(ರೂ.ಲಕ್ಷಗಳಲ್ಲಿ)
<table>
<tr><th rowspan="2">ಕ್ರ.ಸಂ</th><th rowspan="2">ಯೋಜನೆ</th><th colspan="2">ನೀಡಲಾಗುವ ಸಹಾಯಧನ</th></tr>
<tr><th>ಕೇಂದ್ರದ ಪಾಲು</th><th>ರಾಜ್ಯದ ಪಾಲು</th></tr>
<tr><td>1.</td><td>ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾಮೀಣ)</td><td>ಎಲ್ಲಾ ವರ್ಗದವರಿಗೆ</td><td>ಸಾಮಾನ್ಯ ವರ್ಗದವರಿಗೆ</td></tr>
</table>
</td>
</tr>
</table>

| | | | |
|---|---|---|---|
| | | ರೂ.72,000/- | ರೂ.48,000/-, ಪ.ಜಾತಿ ಮತ್ತು ಪ.ಪಂಗಡದವರಿಗೆ ರೂ.78,000/- |
| 2. | * ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ) | ರೂ.1,50,000/- | - |

* ನಗರ ಪ್ರದೇಶದಲ್ಲಿ ಪ್ರಧಾನ ಮಂತ್ರಿ ಆವಾಸ್(ನಗರ) ಯೋಜನೆಯನ್ನು ರಾಜ್ಯ ಸರ್ಕಾರದ ಯೋಜನೆಗಳಾದ ವಾಜಪೇಯಿ ನಗರ ವಸತಿ, ಡಾ : ಬಿ.ಆರ್.ಅಂಬೇಡ್ಕರ್ ನಿವಾಸ್ ಹಾಗೂ ದೇವರಾಜ್ ಅರಸು ವಸತಿ ಯೋಜನೆಗಳೊಂದಿಗೆ ಸಂಯೋಜಿಸಿ ಅನುಷ್ಠಾನಗೊಳಿಸಲಾಗುತ್ತಿದೆ.

ಸರ್ಕಾರವು ಸಾರ್ವಜನಿಕರಿಗೆ ಕೈಗೆಟುಕುವ ಬೆಲೆಯಲ್ಲಿ ವಸತಿ ನಿರ್ಮಿಸಲು ಕೆಳಕಂಡ ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ. ಯೋಜನೆಗಳ ವಿವರ ಕೆಳಕಂಡಂತಿದೆ.

- ಬಸವ ವಸತಿ ಯೋಜನೆ.
- ಡಾ : ಬಿ.ಆರ್.ಅಂಬೇಡ್ಕರ್ ನಿವಾಸ್ ಯೋಜನೆ(ನಗರ ಮತ್ತು ಗ್ರಾಮೀಣ).
- ದೇವರಾಜು ಅರಸು ವಿಶೇಷ ವಸತಿ ಯೋಜನೆ(ನಗರ ಮತ್ತು ಗ್ರಾಮೀಣ).
- ವಾಜಪೇಯಿ ನಗರ ವಸತಿ ಯೋಜನೆ.
- ಪ್ರಧಾನ ಮಂತ್ರಿ ಆವಾಸ್ ಯೋಜನೆ(ಗ್ರಾಮೀಣ).
- ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ).
- ಮುಖ್ಯ ಮಂತ್ರಿಗಳ 1 ಲಕ್ಷ ಬಹುಮಹಡಿ ಬೆಂಗಳೂರು ವಸತಿ ಯೋಜನೆ (ಬೆಂಗಳೂರಿನಲ್ಲಿ ಮಾತ್ರ)

ಆ) ಸಾರ್ವಜನಿಕರಿಗೆ ಕೈಗೆಟುಕುವ ಬೆಲೆಯಲ್ಲಿ ವಸತಿ ನಿರ್ಮಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಇವರಿಗೆ ಯಾವ ಯಾವ ರೀತಿಯ ಆರ್ಥಿಕ ನೆರವು ಸಾಲ ರಿಯಾಯಿತಿ ರೂಪದಲ್ಲಿ ನೀಡಲಾಗಿದೆ;

ಗ್ರಾಮೀಣ ಪ್ರದೇಶದಲ್ಲಿ ಸರ್ಕಾರವು ಸಾಮಾನ್ಯ ವರ್ಗದ ಫಲಾನುಭವಿಗೆ ರೂ.1.20 ಲಕ್ಷಗಳನ್ನು ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ರೂ.1.75 ಲಕ್ಷ ಸಹಾಯಧನ ರೂಪದಲ್ಲಿ ಆರ್ಥಿಕ ನೆರವನ್ನು ಒದಗಿಸಲಾಗುತ್ತಿದೆ.

ನಗರ ಪ್ರದೇಶದಲ್ಲಿ ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ)ಯನ್ನು ರಾಜ್ಯ ಸರ್ಕಾರದ ಯೋಜನೆಗಳಾದ ವಾಜಪೇಯಿ ನಗರ ವಸತಿ, ಡಾ : ಬಿ.ಆರ್.ಅಂಬೇಡ್ಕರ್ ನಿವಾಸ್ ಹಾಗೂ ದೇವರಾಜ್ ಅರಸು ವಸತಿ ಯೋಜನೆಗಳನ್ನು ಸಂಯೋಜಿಸಿ ಅನುಷ್ಠಾನಗೊಳಿಸಲಾಗುತ್ತಿದೆ. ಕೇಂದ್ರ ಸರ್ಕಾರದಿಂದ ನಗರ ಪ್ರದೇಶದಲ್ಲಿ ಸಾರ್ವಜನಿಕರಿಗೆ ಕೈಗೆಟುಕುವ ಬೆಲೆಯಲ್ಲಿ ವಸತಿ ನಿರ್ಮಿಸಲು ಕೆಳಕಂಡ ಆರ್ಥಿಕ ನೆರವು/ಸಾಲ ರಿಯಾಯಿತಿಗಳನ್ನು ನೀಡಲಾಗುತ್ತಿದೆ.

| ಯೋಜನೆಯ ಹೆಸರು | ಆರ್ಥಿಕ ನೆರವು |
|---|---|
| ಪ್ರಧಾನ ಮಂತ್ರಿ ಆವಾಸ್ ಯೋಜನೆ(ನಗರ) | ಫಲಾನುಭವಿಗಳಿಂದ ಸ್ವಯಂ ನಿರ್ಮಾಣ (ಹೊಸ & ವಿಸ್ತರಣೆ)/ ಅಫೋರ್ಡೆಬಲ್ ಹೌಸಿಂಗ್ ಇನ್ ಪಾರ್ಟನರ್ ಶಿಫ್ ಅಡಿ ರೂ.1.50 ಲಕ್ಷ |
| | ಕ್ರೆಡಿಟ್ ಲಿಂಕ್ಡ್ ಸಬ್ಸಿಡಿ ಯೋಜನೆಯಡಿ 6 ಲಕ್ಷದವರೆಗೆ |

| | | |
|---|---|---|
| | | ವಾರ್ಷಿಕ ಆದಾಯ ಹೊಂದಿರುವ ಕುಟುಂಬಕ್ಕೆ ಗರಿಷ್ಠ 2.67 ಲಕ್ಷ, 6 ರಿಂದ 12 ಲಕ್ಷ ವಾರ್ಷಿಕ ಆದಾಯ ಹೊಂದಿರುವ ಕುಟುಂಬಕ್ಕೆ ಗರಿಷ್ಠ ರೂ.2.35 ಲಕ್ಷ, 12 ರಿಂದ 18 ಲಕ್ಷ ವಾರ್ಷಿಕ ಆದಾಯ ಹೊಂದಿರುವ ಕುಟುಂಬಕ್ಕೆ ಗರಿಷ್ಠ ರೂ.2.30 ಲಕ್ಷ ಬಡ್ಡಿ ಸಹಾಯಧನ ನೀಡಲಾಗುವುದು. |
| ಇ) | ವಿಶೇಷವಾಗಿ ಬುಡಕಟ್ಟು ಜನರಿಗೆ ವಸತಿ ನಿರ್ಮಿಸುವಾಗ ಅವರ ಜೀವನ ಶೈಲಿ, ಅಗತ್ಯ ಹಾಗೂ ಆಪೇಕ್ಷೆಯಂತಹ ಮನೆ ವಿನ್ಯಾಸ ಮಾಡಲಾಗಿದೆಯೇ; | ಎಲ್ಲಾ ಯೋಜನೆಗಳಡಿ ಮನೆಗಳ ನಿರ್ಮಾಣವನ್ನು ಸ್ವಂತ: ಫಲಾನುಭವಿಗಳೇ ನಿರ್ಮಿಸಿಕೊಳ್ಳುತ್ತಿದ್ದು, ಅವರ ಅಪೇಕ್ಷೆ ಮತ್ತು ಜೀವನ ಶೈಲಿಗೆ ತಕ್ಕಂತೆ ಸರ್ಕಾರ ನೀಡಲಾಗುವ ಸಹಾಯ ಧನದೊಂದಿಗೆ ಫಲಾನುಭವಿಗಳು ವಂತಿಕೆ ಹಣ ಭರಿಸಿ, ನಿರ್ಮಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.<br><br>ಅದರಂತೆ ಬುಡಕಟ್ಟು ಜನರು ಅವರ ಜೀವನ ಶೈಲಿ ಮತ್ತು ಆಪೇಕ್ಷೆಗೆ ತಕ್ಕಂತೆ ಅವರೇ ಸ್ವಂತ: ಮನೆಗಳನ್ನು ನಿರ್ಮಿಸಿಕೊಳ್ಳಲು ಅವಕಾಶ ನೀಡಲಾಗಿದೆ. ಸಮಾಜ ಕಲ್ಯಾಣ ಇಲಾಖೆಯಿಂದ ಬುಡಕಟ್ಟು ಜನಾಂಗದವರಿಗೆ (ಸೂಕ್ಷ್ಮ ಅತಿ ಸೂಕ್ಷ್ಮ ಅಲೆಮಾರಿ/ಅರೆ ಅಲೆಮಾರಿಗಳು) ಗ್ರಾಮೀಣ ಪ್ರದೇಶದಲ್ಲಿ ರೂ.3.75 ಲಕ್ಷಗಳನ್ನು ಹಾಗೂ ನಗರ ಪ್ರದೇಶದಲ್ಲಿ ರೂ.4.00 ಲಕ್ಷಗಳನ್ನು ಸಹಾಯ ಧನದ ರೂಪದಲ್ಲಿ ಆರ್ಥಿಕ ನೆರವು ನೀಡಲಾಗುತ್ತಿದೆ. |
| ಈ) | ಕಾಡಿನಂಚಿನಲ್ಲಿ ನಿರ್ಮಿಸಲಾಗುವ ಮನೆಗಳಿಗೆ ಕಾಡು ಪ್ರಾಣಿಗಳಿಂದ ಸುರಕ್ಷತೆ ಒದಗಿಸಲು ರಕ್ಷಣಾ ವಿನ್ಯಾಸ ರೂಪಿಸಲಾಗಿದೆಯೇ ? | ಸ್ವಂತ: ಫಲಾನುಭವಿಗಳೇ ಮನೆಗಳನ್ನು ತಮ್ಮ ಅಪೇಕ್ಷೆಗೆ ಅನುಗುಣವಾಗಿ ನಿರ್ಮಿಸಿಕೊಳ್ಳುತ್ತಿರುವುದರಿಂದ ಕಾಡಿನಂಚಿನಲ್ಲಿ ನಿರ್ಮಿಸಲಾಗುವ ಮನೆಗಳಿಗೆ ಕಾಡು ಪ್ರಾಣಿಗಳಿಂದ ಸುರಕ್ಷತೆ ಒದಗಿಸಲು ಯಾವುದೇ ನಿರ್ದಿಷ್ಟ ರಕ್ಷಣಾ ವಿನ್ಯಾಸ ರೂಪಿಸಿರುವುದಿಲ್ಲ. |

ಸಂಖ್ಯೆ :ವಇ 89 ಹೆಚ್‌ಎಂ 2019

(ವಿ. ಸೋಮಣ್ಣ)
ವಸತಿ ಸಚಿವರು